# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ - III | ಬೆಂಗಳೂರು, ಮಂಗಳವಾರ, ಆಗಸ್ಟ್ ೨೧, ೨೦೧೨ (ಶ್ರಾವಣ ೩೦, ಶಕ ವರ್ಷ ೧೯೩೪) | ನಂ. ೫೯೧ |
|---|---|---|


**ಜಿಲ್ಲಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ**

**ಅಧಿಸೂಚನೆ**

**ಸಂಖ್ಯೆ : ಚುನಾವಣೆ(ಪಂ)ಸಿಆರ್/ 52/2012-13 ದಿನಾಂಕ:21.08.2012**

**ಪ್ರಪತ್ರ - 2**

(12(2) ನೇ ನಿಯಮವನ್ನು ನೋಡಿ)

**(ಗ್ರಾಮ ಪಂಚಾಯತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

1. 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ **ರಾಮನಗರ** ಜಿಲ್ಲೆ ಮಾಗಡಿ, ರಾಮನಗರ ಮತ್ತು ಕನಕಪುರ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಗ್ರಾಮಪಂಚಾಯಿತಿಯಲ್ಲಿ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಅನುಬಂಧದಲ್ಲಿನ ಗ್ರಾಮಪಂಚಾಯಿತಿಗಳಿಗೆ ಚುನಾವಣೆ ನಡೆಸಲು

2. **ಮಾಗಡಿ ತಾಲ್ಲೂಕು, ಚುನಾವಣಾ ಕ್ಷೇತ್ರವಾದ ಹುಳ್ಳೇನಹಳ್ಳಿ, ರಾಮನಗರ ತಾಲ್ಲೂಕು ಚುನಾವಣಾ ಕ್ಷೇತ್ರವಾದ ಅಕ್ಕೂರು ಮತ್ತು ಕನಕಪುರ ತಾಲ್ಲೂಕು ಚುನಾವಣಾ ಕ್ಷೇತ್ರವಾದ** ಏಳಗಳ್ಳಿ ಗ್ರಾಮ ಪಂಚಾಯಿತಿಗಳ ಆಕಸ್ಮಿಕವಾಗಿ ತೆರವಾಗಿರುವ/ಸದಸ್ಯರ ಖಾಲಿ ಉಳಿದಿರುವ ಸ್ಥಾನಗಳಿಗೆ ಸದಸ್ಯರು ತೆರವಾದ ಸ್ಥಾನಗಳನ್ನು ತುಂಬಲು

3. ರಾಜ್ಯ ಚುನಾವಣಾ ಆಯೋಗ, ಕರ್ನಾಟಕ, ಬೆಂಗಳೂರು ರವರ **ಆದೇಶ ಸಂಖ್ಯೆ: ರಾಚುಅ/ 12/ಇಜಿಪಿ/2012 ದಿನಾಂಕ:14.08.2012** ರಂತೆ ನೀಡಿರುವ ಚುನಾವಣಾ ವೇಳಾ ಪಟ್ಟಿಯಂತೆ, ಕರ್ನಾಟಕ ಪಂಚಾಯತ್ ರಾಜ್(ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ **ರಾಮನಗರ** ಜಿಲ್ಲೆಯ ಜಿಲ್ಲಾಧಿಕಾರಿ ಆದ ವಿ. **ಶ್ರೀರಾಮರೆಡ್ಡಿ ಭಾ.ಆ.ಸೇ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿರುತ್ತೇನೆ.

1. ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ: ಮತ್ತು ದಿನ **28.08.2012 (ಮಂಗಳವಾರ)**

2. ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ **29.08.2012 (ಬುಧವಾರ)**

3. ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ 31.**08.2012 (ಶುಕ್ರವಾರ)**

4. ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ: ಮತ್ತು ದಿನ **09.09.2012**
**(ಭಾನುವಾರ) ಮತದಾನದ ಸಮಯ ಬೆಳಿಗ್ಗೆ 7-00 ಘಂಟೆಯಿಂದ ಸಾಯಂಕಾಲ 5-00 ಘಂಟೆವರೆಗೆ)**

5. ಮರು ಮತದಾನ ಅವಶ್ಯವಿದ್ದರೆ, ಮರು ಮತದಾನ ನಡೆಸಬೇಕಾದ ದಿನಾಂಕ: ಮತ್ತು ದಿನ
**11.09.2012 (ಮಂಗಳವಾರ) (ಮತದಾನದ ಸಮಯ ಬೆಳಿಗ್ಗೆ 7–00 ಘಂಟೆಯಿಂದ ಸಾಯಂಕಾಲ 5–00 ಘಂಟೆವರೆಗೆ)**

6. ಮತಗಳ ಎಣಿಕೆ ದಿನಾಂಕ:**12.09.2012 ಮತ್ತು ದಿನ (ಬುಧವಾರ)ದಂದು ಬೆಳಿಗ್ಗೆ 8–00** ಗಂಟೆಯಿಂದ
(ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ)

7. ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ
**13.09.2012 (ಗುರುವಾರ)**

**ಜಿಲ್ಲಾಧಿಕಾರಿಗಳು**
ರಾಮನಗರ ಜಿಲ್ಲೆ

**ಅನುಬಂಧ**

| ಕ್ರ ಸಂ | ತಾಲ್ಲೂಕಿನ ಹೆಸರು | ಗ್ರಾಮ ಪಂಚಾಯಿತಿ ಹೆಸರು | ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸ್ಥಾನಗಳ ಸಂಖ್ಯೆ | ಖಾಲಿ ಸ್ಥಾನದ ಮೀಸಲಾತಿ ವಿವರ | ಸ್ಥಾನಗಳು ಖಾಲಿ ಇರುವುದಕ್ಕೆ ಕಾರಣಗಳು |
|---|---|---|---|---|---|---|
| 1 | ಮಾಗಡಿ | ಹುಳ್ಳೇನಹಳ್ಳಿ | ಹುಳ್ಳೇನಹಳ್ಳಿ ಭಾಗ–1 | 1 | ಸಾಮಾನ್ಯ ವರ್ಗ | ಮರಣ ಹೊಂದಿರುತ್ತಾರೆ |
| 2 | ರಾಮನಗರ | ಅಕ್ಕೂರು | ಅಕ್ಕೂರು–01 | 1 | ಸಾಮಾನ್ಯ ವರ್ಗ | ಮರಣ ಹೊಂದಿರುತ್ತಾರೆ |
| 3 | ಕನಕಪುರ | ಉಯ್ಯಂಬಳ್ಳಿ | ಏಳಗಳ್ಳಿ | 1 | ಸಾಮಾನ್ಯ ವರ್ಗ | ಮರಣ ಹೊಂದಿರುತ್ತಾರೆ |

**ಜಿಲ್ಲಾಧಿಕಾರಿಗಳು**
ರಾಮನಗರ ಜಿಲ್ಲೆ

# ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಮಂಗಳವಾರ, ಆಗಸ್ಟ್ ೨೧, ೨೦೧೨ (ಶ್ರಾವಣ ೩೦, ಶಕ ವರ್ಷ ೧೯೩೪) | ನಂ. ೫೯೨ |
|---|---|---|

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್.ಸಿಆರ್.14/2012–13, ದಿನಾಂಕ: 21/08/2012**

**ಪ್ರಪತ್ರ–2**

**[12(2)ನೇ ನಿಯಮವನ್ನು ನೋಡಿ]**

ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕಿನ ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 5 ಗ್ರಾಮಪಂಚಾಯ್ತಿಗಳ 5 ಚುನಾಯಿತ ಸದಸ್ಯರ ಸ್ಥಾನಗಳು ವಿವಿಧ ಕಾರಣಗಳಿಂದ ತೆರವಾಗಿದ್ದು ಇವುಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಯಾದ ಡಾ॥ ಎನ್.ಮಂಜುಳಾ, ಭಾ.ಆ.ಸೇ., ಆದ ನಾನು ಸದರಿ ಚುನಾವಣೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮಗಳ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

**ಚುನಾವಣಾ ವೇಳಾಪಟ್ಟಿ**

| | | |
|---|---|---|
| 1. | ಅಧಿಸೂಚನೆ ದಿನಾಂಕ ಮತ್ತು ದಿನ | 21.08.2012 (ಮಂಗಳವಾರ) |
| 2. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 28.08.2012 (ಮಂಗಳವಾರ) |
| 3. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 29.08.2012 (ಬುಧವಾರ) |
| 4. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 31.08.2012 (ಶುಕ್ರವಾರ) |
| 5. | ಮತದಾನ ಅವಶ್ಯವಿದ್ದರೆ ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆವರೆಗೆ) | 09.09.2012 (ಭಾನುವಾರ) |
| 6. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 11.09.2012 (ಮಂಗಳವಾರ) |
| 7. | ಮತಗಳ ಎಣಿಕೆ ದಿನಾಂಕ: 12.09.2012 (ಬುಧವಾರ) ರಂದು ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 13.09.2012 (ಗುರುವಾರ) |

**ಡಾ॥ ಎನ್.ಮಂಜುಳಾ, ಭಾ.ಆ.ಸೇ.,**
ಜಿಲ್ಲಾಧಿಕಾರಿ ಹಾಗೂ ಚುನಾವಣಾಧಿಕಾರಿ,
ಚಿಕ್ಕಬಳ್ಳಾಪುರ ಜಿಲ್ಲೆ

**ಅನುಬಂಧ**

ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು

**ತಾಲ್ಲೂಕು: ಗೌರಿಬಿದನೂರು**

| ಕ್ರ. ಸಂ | ತಾಲ್ಲೂಕಿನ ಹೆಸರು | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| **1** | **2** | **3** | **4** | **5** |
| 1 | ಗೌರಿಬಿದನೂರು | ಡಿ.ಪಾಳ್ಯ | ಬಚ್ಚರೆಡ್ಡಿಹಳ್ಳಿ | ಪ.ಜಾತಿ |
| 2 | | ಬಿ.ಬೊಮ್ಮಸಂದ್ರ | ಬಿ.ಬೊಮ್ಮಸಂದ್ರ | ಪ.ಜಾತಿ (ಮಹಿಳೆ) |
| 3. | | ಅಲಕಾಪುರ | ಪೋತೇನಹಳ್ಳಿ | ಪ.ಜಾತಿ |
| 4. | | ಸೊನಗಾನಹಳ್ಳಿ | ಸೊನಗಾನಹಳ್ಳಿ | ಹಿಂ.ವರ್ಗ–'ಅ' |
| 5. | | ಬೈಚಾಪುರ | ಬೈಚಾಪುರ | ಪ.ಜಾತಿ |

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಚುನಾವಣಾಧಿಕಾರಿ,**
ಚಿಕ್ಕಬಳ್ಳಾಪುರ ಜಿಲ್ಲೆ

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಮಂಗಳವಾರ, ಆಗಸ್ಟ್ ೨೧, ೨೦೧೨ (ಶ್ರಾವಣ ೩೦, ಶಕ ವರ್ಷ ೧೯೩೪) | ನಂ. ೫೯೩ |
|---|---|---|


## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್.ಸಿಆರ್.14/2012–13, ದಿನಾಂಕ: 21/08/2012**

**ಪ್ರಪತ್ರ–2**

**[12(2)ನೇ ನಿಯಮವನ್ನು ನೋಡಿ]**

ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ತಾಲ್ಲೂಕಿನ ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 1 ಗ್ರಾಮಪಂಚಾಯ್ತಿಯ 1 ಚುನಾಯಿತ ಸದಸ್ಯರ ಸ್ಥಾನ ತೆರವಾಗಿದ್ದು ಇದನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಯಾದ ಡಾ॥ ಎನ್.ಮಂಜುಳಾ, ಭಾ.ಆ.ಸೇ., ಆದ ನಾನು ಸದರಿ ಚುನಾವಣೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮಗಳ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

**ಚುನಾವಣಾ ವೇಳಾಪಟ್ಟಿ**

| | | |
|---|---|---|
| 1. | ಅಧಿಸೂಚನೆ ದಿನಾಂಕ ಮತ್ತು ದಿನ | 21.08.2012 (ಮಂಗಳವಾರ) |
| 2. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 28.08.2012 (ಮಂಗಳವಾರ) |
| 3. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 29.08.2012 (ಬುಧವಾರ) |
| 4. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 31.08.2012 (ಶುಕ್ರವಾರ) |
| 5. | ಮತದಾನ ಅವಶ್ಯವಿದ್ದರೆ ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆವರೆಗೆ) | 09.09.2012 (ಭಾನುವಾರ) |
| 6. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 11.09.2012 (ಮಂಗಳವಾರ) |
| 7. | ಮತಗಳ ಎಣಿಕೆ ದಿನಾಂಕ: 12.09.2012 (ಬುಧವಾರ) ರಂದು ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 13.09.2012 (ಗುರುವಾರ) |

**ಡಾ॥ ಎನ್.ಮಂಜುಳಾ, ಭಾ.ಆ.ಸೇ.,**
ಜಿಲ್ಲಾಧಿಕಾರಿ ಹಾಗೂ ಚುನಾವಣಾಧಿಕಾರಿ,
ಚಿಕ್ಕಬಳ್ಳಾಪುರ ಜಿಲ್ಲೆ

**ಅನುಬಂಧ**

ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸ ಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು

**ತಾಲ್ಲೂಕು: ಚಿಂತಾಮಣಿ**

| ಕ್ರ. ಸಂ | ತಾಲ್ಲೂಕಿನ ಹೆಸರು | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| 1 | 2 | 3 | | 5 |
| 1 | ಚಿಂತಾಮಣಿ | ಚಿನ್ನಸಂದ್ರ | 4–ದೊಡ್ಡಿಹಳ್ಳಿ | ಪ.ಜಾತಿ |

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಚುನಾವಣಾಧಿಕಾರಿ,**
ಚಿಕ್ಕಬಳ್ಳಾಪುರ ಜಿಲ್ಲೆ

# ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಮಂಗಳವಾರ, ಆಗಸ್ಟ್ ೨೧, ೨೦೧೨ (ಶ್ರಾವಣ ೩೦, ಶಕ ವರ್ಷ ೧೯೩೪) | ನಂ. ೫೯೪ |
|---|---|---|

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್.ಸಿಆರ್.14/2012–13, ದಿನಾಂಕ: 21/08/2012**

**ಪ್ರಪತ್ರ–2**

**[12(2)ನೇ ನಿಯಮವನ್ನು ನೋಡಿ]**

ಚಿಕ್ಕಬಳ್ಳಾಪುರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನ ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 4 ಗ್ರಾಮಪಂಚಾಯ್ತಿಯ 4 ಚುನಾಯಿತ ಸದಸ್ಯರ ಸ್ಥಾನಗಳು ತೆರವಾಗಿದ್ದು ಇವುಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಯಾದ ಡಾ॥ ಎನ್.ಮಂಜುಳಾ, ಭಾ.ಆ.ಸೇ., ಆದ ನಾನು ಸದರಿ ಚುನಾವಣೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮಗಳ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

**ಚುನಾವಣಾ ವೇಳಾಪಟ್ಟಿ**

| | | |
|---|---|---|
| 1. | ಅಧಿಸೂಚನೆ ದಿನಾಂಕ ಮತ್ತು ದಿನ | 21.08.2012 (ಮಂಗಳವಾರ) |
| 2. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 28.08.2012 (ಮಂಗಳವಾರ) |
| 3. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 29.08.2012 (ಬುಧವಾರ) |
| 4. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 31.08.2012 (ಶುಕ್ರವಾರ) |

| | | |
|---|---|---|
| 5. | ಮತದಾನ ಅವಶ್ಯವಿದ್ದರೆ ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆವರೆಗೆ) | 09.09.2012 (ಭಾನುವಾರ) |
| 6. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 11.09.2012 (ಮಂಗಳವಾರ) |
| 7. | ಮತಗಳ ಎಣಿಕೆ ದಿನಾಂಕ: 12.09.2012 (ಬುಧವಾರ) ರಂದು ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 13.09.2012 (ಗುರುವಾರ) |

**ಡಾ॥ ಎನ್.ಮಂಜುಳಾ, ಭಾ.ಆ.ಸೇ.,**
ಜಿಲ್ಲಾಧಿಕಾರಿ ಹಾಗೂ ಚುನಾವಣಾಧಿಕಾರಿ,
ಚಿಕ್ಕಬಳ್ಳಾಪುರ ಜಿಲ್ಲೆ

**ಅನುಬಂಧ**

ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸ ಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು

**ತಾಲ್ಲೂಕು: ಶಿಡ್ಲಘಟ್ಟ**

| ಕ್ರ. ಸಂ | ತಾಲ್ಲೂಕಿನ ಹೆಸರು | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| 1 | 2 | 3 | 4 | 5 |
| 1 | ಶಿಡ್ಲಘಟ್ಟ | ಹಂಡಿಗನಾಳ | ಹನುಮಂತಪುರ | ಪ.ಜಾತಿ |
| 2 | | ಚೀಮಂಗಲ | ನಾರಾಯಣ ದಾಸರಹಳ್ಳಿ | ಹಿಂದುಳಿದ 'ಅ' ವರ್ಗ |
| 3 | | ಕುಂಬಿಗಾನಹಳ್ಳಿ | ಹಾರಡಿ | ಪ.ಜಾತಿ |
| 4 | | ತಿಮ್ಮನಾಯಕನಹಳ್ಳಿ | ದಿಂಬಾರ್ಲಹಳ್ಳಿ | ಬಿ.ಸಿ.ಎಂ (ಎ) |

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಚುನಾವಣಾಧಿಕಾರಿ,**
ಚಿಕ್ಕಬಳ್ಳಾಪುರ ಜಿಲ್ಲೆ

# ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಮಂಗಳವಾರ, ಆಗಸ್ಟ್ ೨೧, ೨೦೧೨ (ಶ್ರಾವಣ ೩೦, ಶಕ ವರ್ಷ ೧೯೩೪) | ನಂ. ೫೯೫ |
|---|---|---|

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್.ಸಿಆರ್.14/2012-13, ದಿನಾಂಕ: 21/08/2012**

**ಪ್ರಪತ್ರ-2**

**[12(2)ನೇ ನಿಯಮವನ್ನು ನೋಡಿ]**

ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ತಾಲ್ಲೂಕಿನ ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 2 ಗ್ರಾಮಪಂಚಾಯ್ತಿಗಳ 3 ಚುನಾಯಿತ ಸದಸ್ಯರ ಸ್ಥಾನಗಳು ವಿವಿಧ ಕಾರಣಗಳಿಂದ ತೆರವಾಗಿದ್ದು ಇವುಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಯಾದ ಡಾ॥ ಎನ್.ಮಂಜುಳಾ, ಭಾ.ಆ.ಸೇ., ಆದ ನಾನು ಸದರಿ ಚುನಾವಣೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯಕ್ರಮಗಳ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

**ಚುನಾವಣಾ ವೇಳಾಪಟ್ಟಿ**

| | | |
|---|---|---|
| 1. | ಅಧಿಸೂಚನೆ ದಿನಾಂಕ ಮತ್ತು ದಿನ | 21.08.2012 (ಮಂಗಳವಾರ) |
| 2. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 28.08.2012 (ಮಂಗಳವಾರ) |
| 3. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 29.08.2012 (ಬುಧವಾರ) |
| 4. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 31.08.2012 (ಶುಕ್ರವಾರ) |
| 5. | ಮತದಾನ ಅವಶ್ಯವಿದ್ದರೆ ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆವರೆಗೆ) | 09.09.2012 (ಭಾನುವಾರ) |
| 6. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 11.09.2012 (ಮಂಗಳವಾರ) |
| 7. | ಮತಗಳ ಎಣಿಕೆ ದಿನಾಂಕ: 12.09.2012 (ಬುಧವಾರ) ರಂದು ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 13.09.2012 (ಗುರುವಾರ) |

**ಡಾ॥ ಎನ್.ಮಂಜುಳಾ, ಭಾ.ಆ.ಸೇ.,**
ಜಿಲ್ಲಾಧಿಕಾರಿ ಹಾಗೂ ಚುನಾವಣಾಧಿಕಾರಿ,
ಚಿಕ್ಕಬಳ್ಳಾಪುರ ಜಿಲ್ಲೆ

**ಅನುಬಂಧ**

ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು

**ತಾಲ್ಲೂಕು: ಚಿಕ್ಕಬಳ್ಳಾಪುರ**

| ಕ್ರ ಸಂ | ತಾಲ್ಲೂಕಿನ ಹೆಸರು | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| **1** | **2** | **3** | **4** | **5** |
| 1 | ಚಿಕ್ಕಬಳ್ಳಾಪುರ | ಪಟ್ರೇನಹಳ್ಳಿ | ಪಟ್ರೇನಹಳ್ಳಿ | ಬಿಸಿಎಂ(ಬಿ) |
| 2 | | ಪಟ್ರೇನಹಳ್ಳಿ | ಅಡವಿಗೊಲ್ಲವಾರಹಳ್ಳಿ | ಸಾಮಾನ್ಯ |
| 3. | | ಹೊಸಹುಡ್ಯ | ಗಿಡ್ಡನಹಳ್ಳಿ | ಸಾಮಾನ್ಯ |

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಚುನಾವಣಾಧಿಕಾರಿ,**
ಚಿಕ್ಕಬಳ್ಳಾಪುರ ಜಿಲ್ಲೆ

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಮಂಗಳವಾರ, ಆಗಸ್ಟ್ ೨೧, ೨೦೧೨ (ಶ್ರಾವಣ ೩೦, ಶಕ ವರ್ಷ ೧೯೩೪) | ನಂ. ೫೯೬ |
|---|---|---|

**PARLIAMENTARY AFFAIRS AND LEGISLATION SECRETARIAT**

**NOTIFICATION**

**No. DPAL 27 SAMVYAVI 2012, Bangalore, Dated: 21.08.2012**

In exercise of the powers conferred by clause (a) of section 2 read with sections 3 and 5 of the Karnataka Parliamentary Secretaries and Allowances Act, 1963 (Karnataka Act 15 of 1963) and in Supersession of the earlier notifications issued in this behalf, the Chief Minister of Karnataka has appointed Shri. Shankar B. Patil Munenkoppa, Member of the Karnataka Legislative Assembly as Parliamentary Secretary to the Chief Minister with immediate effect.

He shall be entitled to such salaries and allowances as are admissible to a Cabinet Minister.

By Order and in the name of the Governor of Karnataka,

**G.K. BOREGOWDA**
Secretary to Government,
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಆಗಸ್ಟ್ ೨೨, ೨೦೧೨ (ಶ್ರಾವಣ ೩೧, ಶಕ ವರ್ಷ ೧೯೩೪) | ನಂ. ೫೯೭ |
|---|---|---|

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 38 ಎಲ್ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 22–08–2012**

ಕರ್ನಾಟಕ ರಾಜ್ಯಾದ್ಯಂತ **"ಕೋ–ಆಪರೇಟಿವ್ ಸೊಸೈಟಿಗಳು"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ನಿಗಧಿಪಡಿಸಲು ಸರ್ಕಾರ ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರ ನಿಯಮ ಸಂಖ್ಯೆ: XI) ಪರಿಚ್ಛೇಧ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು–29 ಇವರಿಗೆ ಅಥವಾ ಕಾರ್ಮಿಕ ಅಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ. ಇದು ಕರಡು ಅಧಿಸೂಚನೆಯಾಗಿರುವುದರಿಂದ ಅನುಸೂಚಿಯಲ್ಲಿ ನಮೂದಿಸಿರುವ ದರಗಳು ಬದಲಾವಣೆಯ ನಿಭಂದನೆಗಳಿಗೆ ಒಳಪಟ್ಟಿರುತ್ತವೆ.

ಕನಿಷ್ಟ ವೇತನ ಕಾಯ್ದೆ 1948ರ ಪರಿಚ್ಛೇಧ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಕೋ–ಆಪರೇಟಿವ್ ಸೊಸೈಟಿಗಳು"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಟ ವೇತನ ದರಗಳು | | | | | |
|---|---|---|---|---|---|---|---|
| | | ವಲಯ–1 | | ವಲಯ–2 | | ವಲಯ–3 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| 1 | ಕಾರ್ಯದರ್ಶಿ/ಮ್ಯಾನೇಜರ್ | 259–61 | 6750–00 | 246–15 | 6400–00 | 234–23 | 6090–00 |
| 2 | ಸಹಾಯಕ ಕಾರ್ಯದರ್ಶಿ/ ಸಹಾಯಕ ಮ್ಯಾನೇಜರ್ | 250–00 | 6500–00 | 237–50 | 6175–00 | 225–61 | 5866–00 |
| 3 | ಸೂಪರವೈಸರ್ /ಅಧೀಕ್ಷಕರು | 240–38 | 6250–00 | 228–34 | 5937–00 | 216–92 | 5640–00 |
| 4 | ಅಕೌಟೆಂಟ್ / ಕ್ಯಾಷಿಯರ್ | | | | | | |
| 5 | ಪ್ರಥಮ ದರ್ಜೆ ಗುಮಾಸ್ತ/ಸ್ಟೋರ್ ಕೀಪರ್ | 234–61 | 6100–00 | 222–88 | 5795–00 | 211–53 | 5500–00 |
| 6 | ಶೀಘ್ರಲಿಪಿಗಾರರು | | | | | | |
| 7 | ಬೆರಳಚ್ಚುಗಾರ/ಡಾಟಾ ಎಂಟ್ರೀ ಆಪರೇಟರ್/ಕಂಪ್ಯೂಟರ್ ಆಪರೇಟರ್ | | | | | | |
| 8 | ಬಿಲ್ ಕಲೆಕ್ಟರ್ | | | | | | |
| 9 | ದ್ವಿತಿಯ ದರ್ಜೆ ಗುಮಾಸ್ತ/ ಸಹಾಯಕ ಸ್ಟೋರ್ ಕೀಪರ್ | 228–84 | 5950–00 | 215–38 | 5600–00 | 203–84 | 5300–00 |
| 10 | ಟೆಲಿಫೋನ್ ಆಪರೇಟರ್/ಸ್ವಾಗತಕಾರರು (ರಿಸೆಪ್ಷನಿಸ್ಟ್) | | | | | | |
| 11 | ಸೇಲ್ಸ್‌ಮನ್/ ಸೇಲ್ಸ್ ಗರ್ಲ್ ಗೋಡೌನ್ ಕೀಪರ್ | 225–38 | 5860–00 | 213–84 | 5560–00 | 203–00 | 5280–00 |
| 12 | ತೂಕಮಾಡುವವರು | | | | | | |
| 13 | ಆಫೀಸ್‌ಬಾಯ್/ಪ್ಯೂನ್/ ವಾಚಮನ್/ ಅಟೆಂಡರ್ | | | | | | |
| 14 | ಲೋಡರ್ / ಅನಲೋಡರ್ | 190–38 | 4950–00 | 180–76 | 4700–00 | 171–73 | 4465–00 |
| 15 | ಸ್ವೀಪರ್/ಸ್ಕಾವೇಂಜರ್ ಮತ್ತು ಇತರೇ ಕುಶಲರಲ್ಲದ ಕೆಲಸಗಾರರು | | | | | | |
| 16 | ಲಾರಿ ಡ್ರೈವರ್ | 225–38 | 5860–00 | 213–84 | 5560–00 | 203–00 | 5280–00 |
| 17 | ಕಾರ್/ಜೀಪ್ ಡ್ರೈವರ್ | 210–38 | 5470–00 | 200–00 | 5200–00 | 190–38 | 4950–00 |
| 18 | ಲಾರಿ/ಕಾರ್/ಜೀಪ್ ಕ್ಲೀನರ್ | 190–38 | 4950–00 | 180–76 | 4700–00 | 173–07 | 4500–00 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4624 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4624 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30}}{26} = \text{ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳು.

ವಲಯ–3 : ವಲಯ–1 ಮತ್ತು ವಲಯ–2 ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಆಗಸ್ಟ್ ೨೩, ೨೦೧೨ (ಭಾದ್ರಪದ ೧, ಶಕ ವರ್ಷ ೧೯೩೪) | ನಂ. ೫೯೮ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂ: ಗ್ರಾಅಪ:05:ಜಿಪಸ 2011, ಬೆಂಗಳೂರು ದಿನಾಂಕ: 23-08-2012**

ಕೊಪ್ಪಳ ಜಿಲ್ಲಾ ಪಂಚಾಯತಿ ವ್ಯಾಪ್ತಿಯ 22-ಹಿರೇವಂಕಲಕುಂಟಾ ಮತಕ್ಷೇತ್ರದ ಜಿಲ್ಲಾ ಪಂಚಾಯತಿ ಸದಸ್ಯರಾದ ಶ್ರೀ ಶ್ಯಾಮೀದ್‌ಸಾಬ ಚಳ್ಳಾರಿಸಾ/ ತಾಳಕೇರಿ ರವರ ಮರಣದಿಂದ ಸದಸ್ಯತ್ವ ಸ್ಥಾನವು ಖಾಲಿಯಾಗಿದೆಯೆಂದು ಘೋಷಿಸಿರುವುದರಿಂದ 1993 ರ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2) ರ ಮೇರೆಗೆ ಕೊಪ್ಪಳ ಜಿಲ್ಲಾಧಿಕಾರಿಯವರು ದಿನಾಂಕ: 08-08-2012 ರಂದು ಕೊಪ್ಪಳ ಜಿಲ್ಲಾ ಪಂಚಾಯತಿಗೆ ಉಪ ಚುನಾವಣೆಯನ್ನು ನಡೆಸಲಾದುದರಿಂದ;

ಮತ್ತು ಸದರಿ ಜಿಲ್ಲಾ ಪಂಚಾಯತಿಯ ಕ್ಷೇತ್ರದಲ್ಲಿ ನಡೆಸಲಾದ ಉಪ ಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ಘೋಷಿಸಿರುವುದರಿಂದ,

ಆದುದರಿಂದ 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ (1993ರ ಕರ್ನಾಟಕ ಅಧಿನಿಯಮ 14) 172 ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೊಪ್ಪಳ ಜಿಲ್ಲಾ ಪಂಚಾಯತಿಯಲ್ಲಿ ಉಂಟಾದ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು ಎಂದು ನಮೂದಿಸಿರುವುದರಿಂದ ಕರ್ನಾಟಕ ಸರ್ಕಾರವು ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಕೆಳಗೆ ನಮೂದಿಸಿದಂತೆ ಅಧಿಸೂಚಿಸಿದೆ.

| ಕ್ರ ಸಂ. | ಜಿಲ್ಲಾ ಪಂಚಾಯತಿ ಕ್ಷೇತ್ರದ ಹೆಸರು | 2011ನೇ ಸಾಲಿಗೆ ನಿಗಧಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ:ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| | ಕೊಪ್ಪಳ | | | |
| 1 | 22-ಹಿರೇವಂಕಲಕುಂಟಾ | ಸಾಮಾನ್ಯ | ಶ್ರೀ ಅರವಿಂದಗೌಡ ಶಿವಶರಣಪ್ಪಗೌಡ ಪಾಟೀಲ, ಸಾ. ಹುಣಸಿಹಾಳ, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ. | ಭಾರತೀಯ ಜನತಾ ಪಾರ್ಟಿ (ಬಿ.ಜೆ.ಪಿ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಕುಮಾರ್**
ನಿರ್ದೇಶಕರು (ಪಂ.ರಾಜ್) ಹಾಗೂ
ಸರ್ಕಾರದ ಪದನಿಮಿತ್ತ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಆಗಸ್ಟ್ ೨೩, ೨೦೧೨ (ಭಾದ್ರಪದ ೧, ಶಕ ವರ್ಷ ೧೯೩೪) | ನಂ. ೫೯೯ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂ: ಸಿಆಸುಇ 121 ಶಿಸನೇ 2012, ಬೆಂಗಳೂರು ದಿನಾಂಕ: 22-08-2012**

ಶ್ರೀ ಶಿವನಗೌಡ ನಾಯಕ್, ವಿಧಾನ ಸಭಾ ಸದಸ್ಯರು, ದೇವದುರ್ಗ ಇವರನ್ನು ಮುಖ್ಯ ಮಂತ್ರಿಯವರ ರಾಜಕೀಯ ಕಾರ್ಯದರ್ಶಿಯನ್ನಾಗಿ ನೇಮಿಸಿದ್ದು, ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಸಂಪುಟ ದರ್ಜೆಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶುಕ್ರವಾರ, ಆಗಸ್ಟ್ ೨೪, ೨೦೧೨ (ಭಾದ್ರಪದ ೨, ಶಕ ವರ್ಷ ೧೯೩೪) | ನಂ. ೬೦೦ |
|---|---|---|


## ಕರ್ನಾಟಕ ಸರ್ಕಾರದ ನಡವಳಿಗಳು

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕೃಷಿ ಸಹಕಾರ ಸಂಘಗಳಿಂದ / ಬ್ಯಾಂಕುಗಳಿಂದ ರೈತರು ಪಡೆದ ಅಲ್ಪಾವಧಿ ಬೆಳೆ ಸಾಲ ಮನ್ನಾ–2012.

**ಪ್ರಸ್ತಾವನೆ:**

2011–12ನೇ ಸಾಲಿನ ಮುಂಗಾರು ಹಂಗಾಮಿನಲ್ಲಿ ಅಕ್ಟೋಬರ್‌ವರೆಗೆ ಮಳೆಯ ಅಭಾವದಿಂದ ಹಾಗೂ ಒಣಹವೆಯಿಂದ ಬಾಧಿತವಾದ 21 ಜಿಲ್ಲೆಗಳ 70 ತಾಲ್ಲೂಕುಗಳನ್ನು ದಿನಾಂಕ:04.10.2011ರ ಸರ್ಕಾರಿ ಆದೇಶದಲ್ಲಿ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿದೆ. ಮುಂದುವರೆದು, 09 ಜಿಲ್ಲೆಗಳ 14 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶವೆಂದು ದಿನಾಂಕ: 07.10.2011ರ ಆದೇಶದಡಿ ಘೋಷಿಸಲಾಗಿದೆ. ಅಲ್ಲದೇ, ದಿನಾಂಕ:15.10.2011ರ ಆದೇಶದಲ್ಲಿ 06 ಜಿಲ್ಲೆಗಳ 06 ತಾಲ್ಲೂಕುಗಳನ್ನು ಮತ್ತು 08.11.2011ರಲ್ಲಿ 07 ಜಿಲ್ಲೆಗಳ 09 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿದೆ. ತದನಂತರ, ದಿನಾಂಕ: 01.02.2012ರಂದು 10 ಜಿಲ್ಲೆಗಳ 24 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶವೆಂದು ಘೋಷಿಸಿದೆ. 2012–13ರಲ್ಲಿಯೂ ಮಳೆ ಪ್ರಮಾಣ ಕುಂಠಿತವಾಗಿ ಒಣಹವೆ ಮುಂದುವರೆದ ಕಾರಣ ಸರ್ಕಾರ ದಿನಾಂಕ: 26.07.2012ರಂದು ಈ ಹಿಂದೆ 2011–12ನೇ ಸಾಲಿಗೆ ಬರಪೀಡಿತ ಪ್ರದೇಶವೆಂದು ಘೋಷಿಸಿದ 24 ಜಿಲ್ಲೆಗಳ 123 ತಾಲ್ಲೂಕುಗಳನ್ನು ಬರಪೀಡಿತ ಪ್ರದೇಶವೆಂದು ಮುಂದುವರೆಸಿ ಹೆಚ್ಚುವರಿಯಾಗಿ 10 ಜಿಲ್ಲೆಗಳ 19 ತಾಲ್ಲೂಕುಗಳನ್ನು 2012–13ನೇ ಸಾಲಿಗೆ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯ ಅನುಭವಿಸುತ್ತಿರುವ ಬರಗಾಲ ಪರಿಸ್ಥಿತಿ ಕಳೆದ 40 ವರ್ಷಗಳಲ್ಲಿಯೇ ತೀವ್ರವಾಗಿದೆಯೆಂದು ಮತ್ತು ರೈತರು ಬಿತ್ತನೆ ಮಾಡಿರುವ ಪ್ರದೇಶಗಳಲ್ಲಿ ಸತತ ಒಣಹವೆ ಹಾಗೂ ಮಳೆಯ ಅಭಾವದಿಂದ ಬೆಳೆನಾಶವಾಗಿರುವುದನ್ನು ಸರ್ಕಾರ ಮನಗಂಡಿದೆ. ಇಂತಹ ಸಂಕಷ್ಟದಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರ ಬೆಳೆ ಸಾಲಗಳನ್ನು ಮನ್ನಾ ಮಾಡಬೇಕೆನ್ನುವ ಬೇಡಿಕೆಯನ್ನು ಸರ್ಕಾರ ಪರಿಶೀಲಿಸಿ ಈ ರೈತರ ಜೊತೆಗೆ ಇತರೇ ರೈತರಿಗೂ ಸ್ವಲ್ಪ ಪ್ರಮಾಣದಲ್ಲಿ ಸಾಲ ಮನ್ನಾ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 272 ಸಿಎಲ್‌ಎಸ್ 2012, ಬೆಂಗಳೂರು, ದಿನಾಂಕ: 23.08.2012**

ರಾಜ್ಯದ ರೈತರು ಕೃಷಿ ಸಹಕಾರ ಸಂಘಗಳಿಂದ ದಿನಾಂಕ:01.08.2011 ರಿಂದ 25.07.2012 ರವರೆಗೆ ಪಡೆದು ದಿನಾಂಕ:25.07.2012ಕ್ಕೆ ಬಾಕಿ ಇರುವ ಬೆಳೆ ಸಾಲವನ್ನು ರೂ.25,000.00ವರೆಗೆ ಅಸಲು ಮತ್ತು ಅದಕ್ಕೆ ಸಂಬಂಧಪಟ್ಟ ಬಡ್ಡಿಯೊಂದಿಗೆ ಸಂಪೂರ್ಣ ಮನ್ನಾ ಮಾಡಲಾಗಿದೆ.

ಹೀಗೆ ಮನ್ನಾ ಮಾಡಿದ ಮೊತ್ತವನ್ನು ಸಹಕಾರ ಸಂಘಗಳಿಗೆ ಭರಿಸಿ ಕೊಡಲು ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು :**

1. ಈ ಸೌಲಭ್ಯವು ಕೃಷಿ ಪತ್ತಿನ ಸಹಕಾರ ಸಂಘಗಳಿಂದ ದಿನಾಂಕ: 01.08.2011 ರಿಂದ 25.07.2012ರವರೆಗೆ ಬೆಳೆ ಸಾಲ ಪಡೆದು ದಿನಾಂಕ: 25.07.2012ಕ್ಕೆ ಬಾಕಿ ಇರುವ ಸಾಲಕ್ಕೆ ಅನ್ವಯವಾಗುತ್ತದೆ.
2. ದಿನಾಂಕ: 01.08.2011 ರಿಂದ 25.07.2012ರವರೆಗೆ ಸಾಲ ಪಡೆದು ದಿನಾಂಕ:25.07.2012ಕ್ಕೆ ಬಾಕಿ ಇರುವ ರೂ.25,000.00 ಒಳಗೆ ಇರುವ ಬೆಳೆ ಸಾಲವನ್ನು ಬಡ್ಡಿ ಸಮೇತ ಪೂರ್ಣ ಮನ್ನಾ ಮಾಡಲಾಗಿದೆ.
3. ರೂ.25,000.00ಕ್ಕಿಂತ ಹೆಚ್ಚಿಗೆ ಸಾಲ ಪಡೆದು ಬಾಕಿ ಇರುವ ಸಾಲದಲ್ಲಿ ಮೊದಲ ರೂ.25,000.00 ಅಸಲು ಮತ್ತು ಅದಕ್ಕೆ ಅನ್ವಯವಾಗುವ ಬಡ್ಡಿಯನ್ನು, ಸಾಲ ಪಡೆದ ರೈತರು ರೂ.25,000.00 ಮೇಲ್ಪಟ್ಟ ಸಾಲದ ಅಸಲು ಮತ್ತು ಅದಕ್ಕೆ ಅನ್ವಯವಾಗುವ ದರದಲ್ಲಿ ಬಡ್ಡಿಯನ್ನು ಗಡುವು ದಿನಾಂಕ ಅಥವಾ ದಿನಾಂಕ:30.06.2013 ಇದರಲ್ಲಿ ಯಾವುದು ಮೊದಲೋ ಆ ದಿನಾಂಕದೊಳಗಾಗಿ ಮರುಪಾವತಿ ಮಾಡಿದಲ್ಲಿ, ಮನ್ನಾ ಮಾಡಲಾಗುವುದು.
4. ಈ ಯೋಜನೆಯಲ್ಲಿ ಅರ್ಹವಿರುವ ಸಾಲವು ರೂ.25,000.00 ಮಿತಿಯೊಳಗಿದ್ದರೆ ಆ ಸಾಲದ ಅಸಲು ಮತ್ತು ಸಂಬಂಧಿಸಿದ ಬಡ್ಡಿಯೊಂದಿಗೆ ಕ್ಲೈಮು ಬಿಲ್ಲುಗಳನ್ನು ಕಾಲಕಾಲಕ್ಕೆ ಸಲ್ಲಿಸಿ ಮರುಪಾವತಿ ಪಡೆಯುವುದು.
5. ಈ ಯೋಜನೆಯಲ್ಲಿ ಅರ್ಹವಿರುವ ಸಾಲವು ರೂ.25,000.00ಕ್ಕೆ ಮೇಲ್ಪಟ್ಟಿದ್ದಲ್ಲಿ, ಸಾಲದ ಮೊದಲ ರೂ.25,000.00ಗಳ ಅಸಲು ಮತ್ತು ಅದಕ್ಕೆ ಸಂಬಂಧಿಸಿದ ಬಡ್ಡಿಯನ್ನು, ರೈತರು ರೂ.25,000.00 ಮೇಲ್ಪಟ್ಟ ಸಾಲದ ಅಸಲು ಮತ್ತು ಅದಕ್ಕೆ ಅನ್ವಯವಾಗುವ ದರದಲ್ಲಿ ಬಡ್ಡಿಯನ್ನು ಗಡುವು ದಿನಾಂಕ ಅಥವಾ ದಿನಾಂಕ:30.06.2013 ಇದರಲ್ಲಿ ಯಾವುದು ಮೊದಲೋ ಆ ದಿನಾಂಕದೊಳಗಾಗಿ ಮರುಪಾವತಿ ಮಾಡಿದಲ್ಲಿ, ಕ್ಲೈಮು ಬಿಲ್ಲುಗಳನ್ನು ಕಾಲಕಾಲಕ್ಕೆ ಸಲ್ಲಿಸಿ ಮರುಪಾವತಿ ಪಡೆಯುವುದು.

6. ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟ ಕೃಷಿ ಪತ್ತಿನ ಸಹಕಾರ ಸಂಘಗಳು ಈ ಯೋಜನೆಗೆ ಸಂಬಂಧಿಸಿದ ಕ್ಲೈಮು ಬಿಲ್ಲುಗಳನ್ನು ತಯಾರಿಸಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕು ಮತ್ತು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ಮುಖಾಂತರ ಸಹಕಾರ ಸಂಘಗಳ ನಿಬಂಧಕರಿಗೆ ಕ್ಲೈಮು ಸಲ್ಲಿಸಿ ಮರುಪಾವತಿ ಪಡೆಯುವುದು.

7. ವಾಣಿಜ್ಯ ಬ್ಯಾಂಕುಗಳಿಗೆ ಸಂಯೋಜಿಸಲ್ಪಟ್ಟ ಕೃಷಿ ಪತ್ತಿನ ಸಹಕಾರ ಸಂಘಗಳು ಈ ಯೋಜನೆಗೆ ಸಂಬಂಧಿಸಿದ ಕ್ಲೈಮು ಬಿಲ್ಲುಗಳನ್ನು ತಯಾರಿಸಿ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರ ಮುಖಾಂತರ ಸಹಕಾರ ಸಂಘಗಳ ನಿಬಂಧಕರಿಗೆ ಕ್ಲೈಮು ಸಲ್ಲಿಸಿ ಮರುಪಾವತಿ ಪಡೆಯುವುದು.

8. ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು (ಪಿಕಾರ್ಡ್)ಗಳು ಈ ಯೋಜನೆಗೆ ಸಂಬಂಧಿಸಿದ ಕ್ಲೈಮು ಬಿಲ್ಲುಗಳನ್ನು ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ (ಕಸ್ಕಾರ್ಡ್) ಮುಖಾಂತರ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸಿ ಮರುಪಾವತಿ ಪಡೆಯುವುದು.

9. ಈ ಸಾಲ ಮನ್ನಾ ಯೋಜನೆಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ನಿಬಂಧಕರು ಆಡಳಿತಾತ್ಮಕ ಮಾರ್ಗಸೂಚಿಗಳನ್ನು ಹೊರಡಿಸಿ ಈ ಯೋಜನೆ ಪರಿಣಾಮಕಾರಿಯಾಗಿ ಜಾರಿಯಾಗುವಂತೆ ನೋಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 234 ವೆಚ್ಚ–2/2012 ರಲ್ಲಿ ದಿನಾಂಕ: 22.08.2012 ರಂದು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## PROCEEDINGS OF THE GOVERNMENT OF KARNATAKA

## COOPERTAION SECRETARIAT

**Sub:** Waiver of short-term crop loans availed by farmers from agricultural credit cooperative societies / banks in the State.

**PREAMBLE :**

During 2011-12 Monsoon Season upto October because of severe shortage of rain and dry weather, 71 taluks of 21 districts were declared as drought affected. As on 04.10.2011 again 14 taluks from 09 districts were declared drought affected on 07.10.2011 and again 06 taluks of 06 districts were declared drought effected on 15.10.2011 and 09 taluks of 07 districts on 08.11.2011. Subsequently, 24 taluks of 10 districts were declared drought affected on 01.02.2012. During 2012-13 because of scanty rainfall and dry weather the State Government declared the 123 taluks of 24 districts drought affected for 2012-13 and another 19 taluks of 10 districts were also declared drought affected.

The State Government has observed that the State is facing a severe drought condition for the first time in last 40 years and it has come to the notice of the Government that because of dry weather and scanty rain fall crops have been lost. Under these circumstances, it has come to the notice of the Government to waive the crop loans availed by small and marginal farmers and also waive a portion of the crop loans availed by other farmers.

The proposal has been considered and hence this Order.

### Government Order No: CO 272 CLS 2012, Bengaluru, dated: 23.08.2012

The crop loans availed by the farmers from Agricultural Credit Cooperative Societies from 01.08.2011 to 25.07.2012 and remained outstanding as on 25.07.2012 upto Rs.25,000.00 principal and the interest on it is completely waived.

The amount waived will be reimbursed to the Cooperative institutions subject to the following conditions.

**Conditions :**

1. This facility is applicable to crop loans availed from Agricultural Credit Cooperative Societies from 01.08.2011 to 25.07.2012 and remained outstanding on 25.07.2012.
2. The agricultural loans availed from 01.08.2011 to 25.07.2012 and remained outstanding as on 25.07.2012 which are less than Rs.25,000.00 are waived fully along with interest.
3. If the loan availed is more than Rs.25,000.00, the first Rs.25,000.00 principal and the interest on it is waived, provided the loanee repays the remaining portion of the principal together with the interest on it within the due date or before 30.06.2013 whichever is earlier.
4. Under this scheme, if the loan eligible is less than Rs.25,000.00 the principal and the interest on it has to be claimed by submitting the claim bills from time to time and get the reimbursement.
5. Under this scheme, if the loan eligible is more than Rs.25,000.00 then the first Rs.25,000.00 principal and the interest on it has to be claimed if the loanee repays the remaining portion of the principal along with the interest on it within the due date or before 30.06.2013 whichever is earlier, has to be claimed by submitting the claim bills from time to time and get the reimbursement.
6. The Agricultural Credit Cooperative Societies ceded to District Cooperative Central Banks have to prepare the claim bills under this scheme through the Karnataka State Cooperative Apex Bank Limited to the Registrar of Cooperative Societies and get reimbursement.
7. The Agricultural Credit Coopertive Societies ceded to Commercial Banks have to prepare the claim bills under this scheme and send them through Deputy Registrar of Cooperative Societies to The Registrar of Cooperative Societies concerned and get reimbursement.
8. The Primary Cooperative Agriculture and Rural Development Banks have to submit the claim bills under this scheme through Karnataka State Cooperative Agriculture & Rural Development Bank to The Registrar of Cooperative Societies and get the reimbursement.
9. The Registrar of Cooperative Societies shall issue administrative guidelines for the effective implementation of this loan waiver scheme.

This Order has been issued with the concurrence of the Finance Department vide their note No: FD 235 Exp-2/2012, dated: 22.08.2012.

By Order and in the name of the Governor of Karnataka,

**G.S. RAMANA REDDY**
Officer on Special Duty &
Ex-officio Joint Secretary to Government,
Coopertaion Department

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಶನಿವಾರ, ಆಗಸ್ಟ್ ೨೫, ೨೦೧೨ (ಭಾದ್ರಪದ ೩, ಶಕ ವರ್ಷ ೧೯೩೪) | ನಂ. ೬೦೧ |
|---|---|---|



## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 39 ಎಲ್‌ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 25–08–2012**

ಕರ್ನಾಟಕ ರಾಜ್ಯಾದ್ಯಂತ **"ಹರಳುಗಳನ್ನು ಕತ್ತರಿಸುವುದು, ಹೊಳಪುಗೊಳಿಸುವುದು ಮತ್ತು ಆಭರಣ ತಯಾರಿಕೆ"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ನಿಗಧಿಪಡಿಸಲು ಸರ್ಕಾರ ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರ ನಿಯಮ ಸಂಖ್ಯೆ: XI) ಪರಿಚ್ಛೇಧ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ

ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು–29 ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ. ಇದು ಕರಡು ಅಧಿಸೂಚನೆಯಾಗಿರುವುದರಿಂದ ಅನುಸೂಚಿಯಲ್ಲಿ ನಮೂದಿಸಿರುವ ದರಗಳು ಬದಲಾವಣೆಯ ನಿಭಂದನೆಗಳಿಗೆ ಒಳಪಟ್ಟಿರುತ್ತವೆ.

ಕನಿಷ್ಠ ವೇತನ ಕಾಯ್ದೆ 1948ರ ಪರಿಚ್ಛೇಧ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಹರಳುಗಳನ್ನು ಕತ್ತರಿಸುವುದು, ಹೊಳಪುಗೊಳಿಸುವುದು ಮತ್ತು ಆಭರಣ ತಯಾರಿಕೆ"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ವೇತನವನ್ನು ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು | | | |
|---|---|---|---|---|---|
| | | ವಲಯ–1 | | ವಲಯ–2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| I | **ಅತಿ ಕುಶಲ** | | | | |
| 1 | ತರಬೇತಿದಾರರು | 230–76 | 6000–00 | 219–23 | 5700–00 |
| 2 | ಆಭರಣ ತಯಾರಕರು | 223–07 | 5800–00 | 211–53 | 5500–00 |
| 3 | ಆಭರಣ/ಒಡವೆ ಕುಸುರಿ ಕೆಲಸಗಾರರು | | | | |
| 4 | ಆಭರಣ ರಿಪೇರಿ ಮಾಡುವವರು | 219–23 | 5700–00 | 207–69 | 5400–00 |
| II | **ಕುಶಲ ಕೆಲಸಗಾರರು** | | | | |
| 1 | ಆಭರಣ/ಒಡವೆ ಬೆಸುಗೆ/ರಿಪೇರಿ ಮಾಡುವವರು | 215–38 | 5600–00 | 203–84 | 5300–00 |
| 2 | ಆಭರಣ ಹೊಳಪುಗೊಳಿಸುವುದು/ಪಾಲಿಶ್ ಮಾಡುವುದು | | | | |
| 3 | ಬೆಳ್ಳಿ ಕೆಲಸ | 211–53 | 5500–00 | 200–00 | 5200–00 |
| 4 | ಡೈ ಕಟ್ಟಿಂಗ್ | | | | |
| 5 | ಪತ್ತಾರಿಕೆ | 207–69 | 5400–00 | 196–15 | 5100–00 |
| 6 | ಕಟ್ಟಿಂಗ್ ಮತ್ತು ಪಾಲಿಶಿಂಗ್ | | | | |
| III | **ಅರೆಕುಶಲ** | | | | |
| 1 | ಸೇಲ್ಸಮನ್ | 203–84 | 5300–00 | 192–30 | 5000–00 |
| 2 | ಚೆಕ್ಕಿಂಗ್/ಕಟ್ಟಿಂಗ್ ಸಿಬ್ಬಂದಿ | 200–00 | 5200–00 | 190–38 | 4950–00 |
| IV | **ಕಛೇರಿ ಸಿಬ್ಬಂದಿ** | | | | |
| 1 | ಮ್ಯಾನೇಜರ್ | 259–61 | 6750–00 | 246–15 | 6400–00 |
| 2 | ಅಸಿಸ್ಟೆಂಟ್ ಮ್ಯಾನೇಜರ್ ಸೂಪರ್‌ವೈಸರ್ | 250–00 | 6500–00 | 237–50 | 6175–00 |
| 3 | ಅಕೌಟೆಂಟ್ / ಕ್ಲರ್ಕ್ / ಕ್ಯಾಷಿಯರ್ | 234–61 | 6100–00 | 222–88 | 5795–00 |
| 4 | ಕಂಪ್ಯೂಟರ್ ಆಪರೇಟರ್/ಬೆರಳಚ್ಚುಗಾರರು | 228–84 | 5950–00 | 215–38 | 5600–00 |

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಟ ವೇತನ ದರಗಳು | | | |
|---|---|---|---|---|---|
| | | ವಲಯ–1 | | ವಲಯ–2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| 5 | ಹೆಲ್ಪರ್ಸ್/ಕ್ಲಿನರ್ಸ್ | 190–38 | 4950–00 | 180–76 | 4700–00 |
| 6 | ಅಂಗಡಿ ಸಹಾಯಕ | | | | |
| 7 | ಪ್ಯೂನ್/ವಾಚಮನ್/ಜವಾನ | | | | |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4624 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4624 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ತುಟ್ಟಿಭತ್ಯೆ

26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶನಿವಾರ, ಆಗಸ್ಟ್ ೨೫, ೨೦೧೨ (ಭಾದ್ರಪದ ೩, ಶಕ ವರ್ಷ ೧೯೩೪) | ನಂ. ೬೦೨ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಬಿ.ಪಿ.ಎಲ್ ಪಡಿತರ ಚೀಟಿಗಾಗಿ ಕುಟುಂಬಗಳ ಅರ್ಹತೆಯನ್ನು ನಿರ್ಧರಿಸಲು ಮಾನದಂಡಗಳ ಪರಿಷ್ಕರಣೆ–ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆನಾಸ 244 ಡಿಆರ್ಎ 2006, ದಿನಾಂಕ: 9.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಬಡತನ ರೇಖೆ ಕೆಳಗಿರುವ ಕುಟುಂಬಗಳನ್ನು ಗುರುತಿಸಿ ಪಡಿತರ ಚೀಟಿಗಳನ್ನು ವಿತರಿಸಲು ಹಲವು ಮಾನದಂಡಗಳನ್ನು ನಿಗದಿಪಡಿಸಿ ಆದೇಶಿಸಲಾಗಿತ್ತು. ಬಡತನ ರೇಖೆಗಿಂತ ಕೆಳಗೆ ಮತ್ತು ಬಡತನ ರೇಖೆಗಿಂತ ಮೇಲೆ ಎಂದು ವಿಭಾಗಿಸಿ, ಅರ್ಹರಿಗೆ ಬಿಪಿಎಲ್ ಪಡಿತರ ಚೀಟಿಗಳನ್ನು ನೀಡುವಲ್ಲಿ ಬಡ ಕುಟುಂಬಗಳು ಪಡಿತರ ವ್ಯವಸ್ಥೆಯಿಂದ ವಂಚಿತರಾಗುವುದನ್ನು ತಡೆಯುವ ಹಾಗೂ ಅನರ್ಹ ಕುಟುಂಬಗಳು ವ್ಯವಸ್ಥೆಯ ಲಾಭವನ್ನು ಪಡೆಯಬಾರದೆಂಬ ಉದ್ದೇಶದಿಂದ ಬಿಪಿಎಲ್ ಕುಟುಂಬಗಳನ್ನು ಗುರುತಿಸುವ ಸಲುವಾಗಿ ಹಲವು ಸುಧಾರಿತ ಮಾನದಂಡಗಳನ್ನು ನಿಗಧಿಪಡಿಸುವುದು ಅಗತ್ಯವೆಂದು ಮನಗಂಡ ಹಿನ್ನೆಲೆಯಲ್ಲಿ ಸಾರ್ವತ್ರಿಕ ಪಡಿತರ ವ್ಯವಸ್ಥೆಯಲ್ಲಿ ಸುಧಾರಣೆ ತರಲು ಉದ್ದೇಶಿಸಲಾಗಿದೆ.

ಪ್ರಸ್ತುತ ರಾಜ್ಯದಲ್ಲಿ ಕುಟುಂಬಗಳನ್ನು, ಬಡತನ ರೇಖೆಗಿಂತ ಕೆಳಗೆ ಮತ್ತು ಬಡತನ ರೇಖೆಗಿಂತ ಮೇಲೆ ಎಂದು ವಿಭಾಗಿಸಿ ಸಾರ್ವಜನಿಕ ಪಡಿತರ ವ್ಯವಸ್ಥೆಯ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಈ ರೀತಿ ವಿಭಾಗಿಸುವ ಸಂದರ್ಭದಲ್ಲಿ, ಬಡತನ ರೇಖೆಗಿಂತ ಮೇಲಿರುವ ಕುಟುಂಬಗಳು ಯಾವುವು ಮತ್ತು ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳು ಯಾವುವು ಎಂದು ಗುರುತಿಸುವುದು ವಾಸ್ತವವಾಗಿ ಕಷ್ಟಸಾಧ್ಯವಾದ ಕೆಲಸವಾಗಿರುತ್ತದೆ. ಅದು ಮಾತ್ರವಲ್ಲದೆ ಕುಟುಂಬಗಳ, ವಾರ್ಷಿಕ ಆದಾಯ ನಗರ ಪ್ರದೇಶದಲ್ಲಿ ರೂ.17,000/– ಕ್ಕಿಂತ ಮತ್ತು ಗ್ರಾಮೀಣ ಪ್ರದೇಶದಲ್ಲಿ ರೂ.12,000/– ಕ್ಕಿಂತ ಕೆಳಗಿದ್ದರೆ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳು ಎಂದು ಸರ್ಕಾರದ ನೀತಿ ಇದ್ದರೂ ಸಹ, MNREGS ಯೋಜನೆಯಲ್ಲಿ ದಿನಗೂಲಿ ರೂ.155/– ಅನ್ನುವುದನ್ನು ಪರಿಗಣಿಸಿದಾಗ ಅದು ವಾಸ್ತವಾಂಶವಾಗಿರುವುದಿಲ್ಲ. ಆದಕಾರಣ, ಬಹಳ ಬಡಕುಟುಂಬಗಳು ಪಡಿತರ ವ್ಯವಸ್ಥೆಯಿಂದ ವಂಚಿತರಾಗಿರುತ್ತಾರೆ ಮತ್ತು ಅನರ್ಹ ಕುಟುಂಬಗಳು ವ್ಯವಸ್ಥೆಯ ಲಾಭ ಪಡೆಯುತ್ತಿದ್ದಾರೆ.

ಈ ಮೇಲಿನ ಕಾರಣಗಳಿಂದಾಗಿ ಕುಟುಂಬಗಳನ್ನು ಆರ್ಥಿಕವಾಗಿ ಸದೃಢವಾದ ಮತ್ತು ದುರ್ಬಲವಾದ ಕುಟುಂಬಗಳು ಎಂದು ಗುರುತಿಸುವುದು ಸೂಕ್ತವಾಗಿರುತ್ತದೆ. ಆರ್ಥಿಕವಾಗಿ ಸಧೃಡವಾಗಿರುವ ಕುಟುಂಬಗಳನ್ನು ಗುರುತಿಸಲು ನಿಖರವಾದ ಮಾನದಂಡವನ್ನು ನಿಗದಿಪಡಿಸಿ, ಅಂತಹ ಕುಟುಂಬಗಳಿಗೆ ಕೇಂದ್ರ ಸರ್ಕಾರವು ಸರಬರಾಜು ಮಾಡುವ ಎ.ಪಿ.ಎಲ್. ಆಹಾರಧಾನ್ಯಗಳನ್ನು ಮತ್ತು ಉಳಿದ ಎಲ್ಲಾ ಕುಟುಂಬಗಳಿಗೆ ಕೇಂದ್ರ ಸರ್ಕಾರವು ಸರಬರಾಜು ಮಾಡುವ ಬಿ.ಪಿ.ಎಲ್. ಆಹಾರಧಾನ್ಯಗಳನ್ನು ಈಗ ಪ್ರಸ್ತುತ: ಇರುವ ದರದಲ್ಲಿ ಸರಬರಾಜು ಮಾಡುವುದು ಸೂಕ್ತವಾಗಿರುತ್ತದೆ.

ಆದ್ದರಿಂದ ಅರ್ಹ ಬಿಪಿಎಲ್ ಕುಟುಂಬಗಳನ್ನು ಸಾರ್ವಜನಿಕ ಪಡಿತರ ವ್ಯವಸ್ಥೆಯ ವ್ಯಾಪ್ತಿಗೆ ಒಳಪಡಿಸುವ ಉದ್ದೇಶದಿಂದ ಈ ಹಿಂದೆ ನಿಗದಿಪಡಿಸಲಾಗಿದ್ದ ಬಿಪಿಎಲ್ ಮಾನದಂಡಗಳನ್ನು ಸುಧಾರಿಸಿ ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದ್ದು, ಅದರಂತೆ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಆನಾಸ 80 ಡಿಆರ್ಎ 2012, ಬೆಂಗಳೂರು, ದಿನಾಂಕ: 24ನೇ ಆಗಸ್ಟ್, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆರ್ಥಿಕವಾಗಿ ಸದೃಢ ಕುಟುಂಬಗಳನ್ನು ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಿ ಗುರುತಿಸತಕ್ಕದ್ದು:

1) ಆದಾಯ ತೆರಿಗೆ ಪಾವತಿಸುವ ಸದಸ್ಯರನ್ನು ಒಳಗೊಂಡ ಎಲ್ಲಾ ಕುಟುಂಬಗಳು.

2) ಎಲ್ಲಾ ವರ್ಗದ ಸರ್ಕಾರಿ ನೌಕರರು.

3) ಸರ್ಕಾರಿ ಸ್ವಾಮ್ಯದ ಉದ್ಯಮಗಳು / ಮಂಡಳಿಗಳು / ನಿಗಮಗಳ ಖಾಯಂ ನೌಕರರು.

4) ಸ್ವಾಯತ್ತ ಸಂಸ್ಥೆಯ / ಮಂಡಳಿಗಳ ನೌಕರರು.

5) ಸಹಕಾರ ಸಂಘಗಳ ಖಾಯಂ ಸಿಬ್ಬಂದಿಗಳು.

6) ವೃತ್ತಿಪರ ವರ್ಗಗಳು: ವೈದ್ಯರುಗಳು, ಆಸ್ಪತ್ರೆಗಳ ನೌಕರರು, ವಕೀಲರುಗಳು, ಲೆಕ್ಕ ಪರಿಶೋಧಕರುಗಳು.

7) ಸೈಕಲ್ ಮೇಲೆ ಅಥವಾ ಗಾಡಿಗಳ ಮೇಲೆ ತಳ್ಳಿಕೊಂಡು ಅಥವಾ ರಸ್ತೆಯ ಪಕ್ಕದಲ್ಲಿ ಕುಳಿತು ವ್ಯಾಪಾರ ಮಾಡುವ ಮತ್ತು ತರಕಾರಿ ಮಾತ್ರ ವ್ಯಾಪಾರ ಮಾಡುವ ಹಾಗೂ ಗೂಡಂಗಡಿಗಳಲ್ಲಿ ವ್ಯಾಪಾರ ಮಾಡುವವರನ್ನು ಹೊರತುಪಡಿಸಿ. ಉಳಿದ ಎಲ್ಲಾ ವ್ಯಾಪಾರಸ್ಥರು.

8) 3 ಹೆಕ್ಟೇರ್ (7½ ಎಕರೆ) ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿದವರು.

9) ಒಂದು ಆಟೋರಿಕ್ಷಾವನ್ನು ಹೊಂದಿ, ಸ್ವತ: ಓಡಿಸುತ್ತಿದ್ದು ಬೇರೆ ಆದಾಯದ ಮೂಲವಿಲ್ಲದವರನ್ನು ಹೊರತುಪಡಿಸಿ, 100 ಸಿ.ಸಿ.ಗೆ ಮೇಲ್ಪಟ್ಟ ಇಂಧನ ಚಾಲಿತ ವಾಹನಗಳನ್ನು (ದ್ವಿಚಕ್ರ, ತ್ರಿಚಕ್ರ, ಕಾರು ಇತ್ಯಾದಿ ವಾಹನ) ಹೊಂದಿರುವ ಸದಸ್ಯರನ್ನು ಒಳಗೊಂಡ ಕುಟುಂಬ.

10) ಅನುದಾನರಹಿತ ಕನ್ನಡ ಶಾಲೆಗಳ ನೌಕರರನ್ನು ಹೊರತುಪಡಿಸಿ, ಅನುದಾನಿತ/ಅನುದಾನರಹಿತ ಶಾಲಾ ಕಾಲೇಜುಗಳ ನೌಕರರು.

11) ನೊಂದಾಯಿತ ಗುತ್ತಿಗೆದಾರರು, ಎ.ಪಿ.ಎಂ.ಸಿ. ಟ್ರೇಡರ್ಸ್/ಕಮಿಷನ್ ಏಜೆಂಟ್ಸ್/ಬೀಜ ಮತ್ತು ಗೊಬ್ಬರ ಇತ್ಯಾದಿ ಡೀಲರ್ಸ್.

12) ಮನೆ/ಮಳಿಗೆ/ಕಟ್ಟಡಗಳನ್ನು ಬಾಡಿಗೆಗೆ ನೀಡಿ ವರಮಾನ ಪಡೆಯುವವರು.

13) ಪ್ರತಿ ತಿಂಗಳಿಗೆ ಸರಾಸರಿ ವಿದ್ಯುತ್ ಬಿಲ್ ರೂ.450/– ಕ್ಕಿಂತ ಮೇಲ್ಪಟ್ಟು ಪಾವತಿಸುವ ಕುಟುಂಬಗಳು.

14) ಬಹುರಾಷ್ಟ್ರೀಯ ಕಂಪನಿ, ಉದ್ದಿಮೆ/ಕೈಗಾರಿಕೆಗಳ ನೌಕರರು.

ಮೇಲ್ಕಂಡಂತೆ ಗುರುತಿಸಿದ ಆರ್ಥಿಕವಾಗಿ ಸದೃಢವಾದ ಕುಟುಂಬಗಳನ್ನು ಹೊರತುಪಡಿಸಿ ಉಳಿದ ಕುಟುಂಬಗಳನ್ನು ಬಿಪಿಎಲ್ ಕಾರ್ಡನ್ನು ಹೊಂದಲು ಅರ್ಹ ಕುಟುಂಬವೆಂದು ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಆಗಸ್ಟ್ ೨೭, ೨೦೧೨ (ಭಾದ್ರಪದ ೫, ಶಕ ವರ್ಷ ೧೯೩೪) | ನಂ. ೬೦೩ |
|---|---|---|


## ಸಹಕಾರ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ : ಸಇ 156 ಎಂಆರ್‌ಇ 2012 (ಭಾಗ), ಬೆಂಗಳೂರು, ದಿನಾಂಕ : 25ನೇ ಆಗಸ್ಟ್, 2012**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಇ 156 ಎಂಆರ್‌ಇ (04) 2012 ದಿನಾಂಕ: 30/07/2012 ರಲ್ಲಿ **ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಜಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರಟಗಿ** ಸದಸ್ಯರನ್ನಾಗಿ ಮುಂದುವರೆಸಿದ ಈ ಕೆಳಕಂಡವರ ನಾಮ ನಿರ್ದೇಶನವನ್ನು **ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 10(1)** ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರದ್ದುಪಡಿಸಿದೆ:–

**01) ಶ್ರೀ ಕೆ. ಸತ್ಯನಾರಾಯಣ ತಂದೆ ಗನ್ನಿರಾಜು,**
**ಅಂಜೂರ್ ಕ್ಯಾಂಪ್, ಅಂಚೆ ಮುಸ್ಟೂರ್.**

**02) ಶ್ರೀ ಅಬ್ದುಲ್ ರೋಫ್, ಸಾ॥ ಸಿದ್ದಾಪುರ.**

**03) ಶ್ರೀ ಸಿದ್ಧನಗೌಡ ವೀರಣ್ಣ ಬಾಗೋಡಿ,**
**ಸಾ॥ ಬೂದಗುಂಪಾ,**

2. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಇ 77 ಎಂಆರ್‌ಇ 2011 ದಿನಾಂಕ:05/03/2011 ರನ್ವಯ **ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರಟಗಿ** ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿರುವ (1) **ಶ್ರೀ ಬಜಾರ ಮುರಡಬಸಪ್ಪ ತಂದೆ ಬಸಪ್ಪ ಕೋಲಕಾರ, ಸಾ॥ ಯರಡೋಣ** ಮತ್ತು (2) **ಶ್ರೀ ಚಿಟ್ಟೂರಿ ದುರ್ಗಾರಾವ್ ತಂದೆ ಲಚ್ಚಯ್ಯ, ಸಾ॥ ಬರಗೂರು ಕ್ಯಾಂಪ್** ಇವರ ನಾಮ ನಿರ್ದೇಶನವನ್ನು ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 346 ಎಂಆರ್‌ಇ 2010 ದಿನಾಂಕ:24/01/2011 ರನ್ವಯ ನಾಮನಿರ್ದೇಶನ ಮಾಡಲಾಗಿರುವ (1) **ಶ್ರೀ ಸಿದ್ದನಗೌಡ ತಂದೆ ಲಿಂಗನಗೌಡ, ಮಾಲಿಪಾಟೀಲ್, ಸಾಂಬೂದಾಗುಂಪಾ, (2) ಶ್ರೀ ಮುಕ್ತಾಂಸಾಬ್ ತಂದೆ ಖಾದರ್‌ಸಾಬ್ ಕಟಂಬ್ಲಿ, ಸಾ:ಸಿದ್ದಾಪುರ ಮತ್ತು (3) ಶ್ರೀ ವೆಂಕೋಬಣ್ಣ ಶ್ರೇಷ್ಠಿ ತಂದೆ ವೀರಯ್ಯ ಶ್ರೇಷ್ಠಿ, ಸಾ:ಕಾರಟಗಿ (ವರ್ತಕರ ಕ್ಷೇತ್ರದ ಪ್ರತಿನಿಧಿ)** ದಿನಾಂಕ:31/08/2012 ರಿಂದ ದಿನಾಂಕ:30/08/2013 ರ ವರೆಗೆ ವಿಸ್ತರಿಸಿದೆ.

3. ಸರ್ಕಾರದ ಅಧಿಸೂಚನೆ ಸಂಖ್ಯೆ: 77 ಎಂಆರ್‌ಇ 2011 ದಿನಾಂಕ:10/06/2011 ರಲ್ಲಿ **ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರಟಗಿಯ** ಉಪಾಧ್ಯಕ್ಷರನ್ನಾಗಿ **ಶ್ರೀ ಜಿ. ರಾಮಮೋಹನ್ ತಂದೆ ಜಿ.ರಾಮರಾವ್, ಸಾ॥ ಪಟೇಲ್ ಕ್ಯಾಂಪ್, ಅಂಚೆ ಚೆಳ್ಳೂರು** ಇವರನ್ನು ನಾಮ ನಿರ್ದೇಶನ ಮಾಡಿದ್ದು, ಇವರನ್ನು ಉಪಾಧ್ಯಕ್ಷರನ್ನಾಗಿ ದಿನಾಂಕ: 31/08/2012 ರಿಂದ ದಿನಾಂಕ:30/08/2013 ರ ವರೆಗೆ ಅಥವಾ ಸರ್ಕಾರದ ಇಚ್ಛಾನುಸಾರವಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

## PARLIAMENTARY AFFAIRS AND LEGISLATION SECRETARIAT

### NOTIFICATION

**No. DPAL 06 SAMVYAVI 2012, Bangalore, Dated : 28.8.2012**

The following Order made by the Governor is hereby published for general information:-

**"ORDER - I**

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Council.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

## PARLIAMENTARY AFFAIRS AND LEGISLATION SECRETARIAT

### NOTIFICATION

**No. DPAL 06 SAMVYAVI 2012, Bangalore, Dated : 28.8.2012**

The following Order made by the Governor is hereby published for general information:-

**"ORDER - II**

In exercise of the powers conferred upon me by sub-clause (a) of clause (2) of Article 174 of the Constitution of India, I, H.R.Bhardwaj, Governor of Karnataka, do hereby prorogue the Karnataka Legislative Assembly.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**G.K. BOREGOWDA**
Secretary to Government
Department of Parliamentary Affairs and Legislation

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಆಗಸ್ಟ್ ೨೯, ೨೦೧೨ (ಭಾದ್ರಪದ ೭, ಶಕ ವರ್ಷ ೧೯೩೪) | ನಂ. ೬೧೦ |
|---|---|---|

**MINORITY WELFARE, HAJ & WAKFS SECRETARIAT**

**NOTIFICATION**

**No. MWD 55 WHJ 2012 (P4), Bangalore, dated: 29th August, 2012**

Under Section 21(3) of the Haj Committee Act 2002 Government of Karnataka hereby notify that Shri. Mohammed Margoob Ahmed, S/o Mohammed Mustaq Ahmed, No. 37, AGS Colony, 6th Main, Anand Nagar, Bangalore-560 032 a Member of the Karnataka State Haj Committee is duly elected as Chairman of Karnataka State Haj Committee.

This order is subject to the result in Writ Petition No.27982/2012 pending before the Hon'ble High Court of Karnataka.

By order and in the name of the Governor of Karnataka,

**ABBAS SHARIEFF**
Under Secretary to Government,
Minority Welfare, Haj & Wakfs Department

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಬುಧವಾರ, ಆಗಸ್ಟ್ ೨೯, ೨೦೧೨ (ಭಾದ್ರಪದ ೭, ಶಕ ವರ್ಷ ೧೯೩೪) | ನಂ. ೬೧೧ |
|---|---|---|

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲೋಇ 95 ಸೇಸಕಿ 12, ಬೆಂಗಳೂರು, ದಿನಾಂಕ: 28–08–2012**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ ದಿನಾಂಕ: 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 07.03.2012 ಹಾಗೂ 09–07–2012ರ ಪತ್ರಗಳಲ್ಲಿ ಶ್ರೀ ಮಹಮದ್ ಅಖೀಬ್ ಅಹಮ್ಮದ್ ಖುರೇಷಿ, ಸಹಾಯಕ ಇಂಜಿನಿಯರ್, ಇವರು ದಿನಾಂಕ 1–05–1986 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು 10 ವರ್ಷಗಳ ಸೇವೆ ಪೂರೈಸಿದ ನಂತರ ಸರ್ಕಾರದ ಆದೇಶ ಸಂಖ್ಯೆ:ಲೋಇ:64:ಪಿಡಬ್ಲೂಸಿ:97 ದಿನಾಂಕ 10–6–97ರಲ್ಲಿ ಅವರ ಸೇವೆಯನ್ನು ದಿನಾಂಕ 01.05.1996 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರನ್ನು ಸೇರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಇವರ ಶಿಫಾರಸ್ಸನ್ನು ಪರಿಶೀಲಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಮಹಮದ್ ಅಖೀಬ ಅಹಮ್ಮದ್ ಖುರೇಷಿ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3515–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of En try into service | Date of Regular Appoint ment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3515-A | - | MD. Akheeqh Ahmed Quraishi | - | 8.3.1962 | 1.5.1986 | 1.5.1996 | DWR |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು–560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಬುಧವಾರ, ಆಗಸ್ಟ್ ೨೯, ೨೦೧೨ (ಭಾದ್ರಪದ ೭, ಶಕ ವರ್ಷ ೧೯೩೪) | ನಂ. ೬೧೨ |
|---|---|---|

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 94 ಸೇಸಕಿ 12, ಬೆಂಗಳೂರು, ದಿನಾಂಕ: 28–08–2012**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 19.03.2012 ಹಾಗೂ 09.07.2012ರ ಪತ್ರಗಳಲ್ಲಿ ಶ್ರೀ ಪಿ.ಎಸ್.ಡೊಳ್ಳಿ, ಸಹಾಯಕ ಇಂಜಿನಿಯರ್, ಇವರು ದಿನಾಂಕ 26.03.1986 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು 10 ವರ್ಷಗಳ ಸೇವೆ ಪೂರೈಸಿದ ನಂತರ ಅವರ ಸೇವೆಯನ್ನು ಸಂಖ್ಯೆ:ಲೋಇ:626:ಪಿಡಬ್ಲೂಸಿ:96 ದಿನಾಂಕ 29–6–96ರಲ್ಲಿ ದಿನಾಂಕ 26–03–1996ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರನ್ನು ಸೇರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ)ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಪಿ.ಎಸ್.ಡೊಳ್ಳಿ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3510–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

